CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ನವೆಂಬರ್ ೧೮, ೨೦೦೪ (ಕಾರ್ತಿಕ ೨೭, ಶಕ ವರ್ಷ ೧೯೨೬) | ಸಂಚಿಕೆ ೪೬ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಪಶುಪಾಲನಾ ಮತ್ತು ಪಶುವೈದ್ಯಾಸೇವಾ ಇಲಾಖೆ**

**ಉಪನಿರ್ದೇಶಕರ ಕಛೇರಿ, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರುಘಟ್ಟ, ಬೆಂಗಳೂರು-89**

**ಅಮರಾಯಿ ಫಸಲಿನ ಬಹಿರಂಗ ಹರಾಜು ಇಸ್ತಿಹಾರ್**

**ಸಂಖ್ಯೆ: ಉನಿ:ಜಾಸಂಕ್ಷೇ: ಸಿ3:ಅಮಫ:ಹರಾಜು:2004-05 ದಿನಾಂಕ: 2ನೇ ನವೆಂಬರ್ 2004**

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರುವುದೇನೆಂದರೆ ಈ ಕ್ಷೇತ್ರಕ್ಕೆ ಸೇರಿದ ಈ ಕೆಳಗೆ ನಮೂದಿಸಿರುವ ಮರಗಳಲ್ಲಿರುವ ಫಸಲನ್ನು ದಿನಾಂಕ: 23.12.2004ನೇ ಗುರುವಾರದಂದು ಬೆಳಿಗ್ಗೆ 11-00 ಗಂಟೆಗೆ ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89 ರಲ್ಲಿನ ಕಛೇರಿ ಆವರಣದಲ್ಲಿ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

**ಹರಾಜಿನ ವಿವರ**

| | | | |
|---|---|---|---|
| 1) | ಹುಣಸೆ ಫಸಲು | - | 304 ಮರಗಳ ಫಸಲು |
| 2) | ಹೊಂಗೆ ಫಸಲು | - | 75 ಮರಗಳ ಫಸಲು |
| 3) | ಹಿಪ್ಪೆ ಫಸಲು | - | 14 ಮರಗಳ ಫಸಲು |
| 4) | ಬೇವಿನ ಫಸಲು | - | 193 ಮರಗಳ ಫಸಲು |

**ನಿಬಂಧನೆಗಳು:**

1. ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮೊದಲು ರೂಪಾಯಿ 2000-00 (ರೂಪಾಯಿ ಎರಡು ಸಾವಿರ ಮಾತ್ರ)ಗಳನ್ನು ಠೇವಣಿ ಹಣವನ್ನು ನಗದು ರೂಪದಲ್ಲಿ ಸಂದಾಯ ಮಾಡಿ ರಸೀದಿ ಪಡೆಯತಕ್ಕದ್ದು. ಈ ಹಣವನ್ನು ಹೆಚ್ಚು ಬಿಡ್ಡು ಮಾಡಿದವರನ್ನು ಹೊರತುಪಡಿಸಿ ಹರಾಜು ಮುಗಿದ ನಂತರ ಹಿಂದಿರುಗಿಸಲಾಗುವುದು.
2. ಯಶಸ್ವಿ ಹರಾಜುದಾರರು ಪೂರ್ಣ ಮೊಬಲಗನ್ನು ಮತ್ತು ಸಂಬಂಧಪಟ್ಟ ಇತರೆ ತೆರಿಗೆಗಳ ಸಹಿತ ತಕ್ಷಣವೇ ಪಾವತಿ ಮಾಡಿ ರಸೀದಿ ಪಡೆಯತಕ್ಕದ್ದು. ತಪ್ಪಿದ್ದಲ್ಲಿ ಠೇವಣಿಯನ್ನು ದಂಡವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಪುನಃ ಹರಾಜು ಮಾಡಲಾಗುವುದು. ಆದರಿಂದ ಆದ ನಷ್ಟದ ಮೊಬಲಗನ್ನು ಮೊದಲನೆಯ ಯಶಸ್ವಿ ಹರಾಜುದಾರರಿಂದಲೇ ರೆವಿನ್ಯೂ ಬಾಕಿಯೆಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಲಾಭವೇನಾದರೂ ಬಂದಲ್ಲಿ ಅದಕ್ಕೆ ಅವರು ಅರ್ಹರಾಗಿರುವುದಿಲ್ಲ.
3. ಹರಾಜಿನಲ್ಲಿ ಕೊಂಡ ಫಸಲನ್ನು ಎಲ್ಲ ವಿಧದಲ್ಲಿಯೂ ಕಾಪಾಡಿಕೊಳ್ಳುವ ಜವಾಬ್ದಾರಿಯು ಫಸಲನ್ನು ಕೊಂಡವರಿಗೆ ಸೇರಿರುತ್ತದೆ. ಈ ಬಗ್ಗೆ ಯಾವ ವಿಧವಾದ ದೂರುಗಳನ್ನು ಸ್ವೀಕರಿಸಲಾಗುವುದಿಲ್ಲ.
4. ಸರ್ಕಾರದ ಸ್ವತ್ತಿಗೆ ಯಾವ ವಿಧವಾದ ನಷ್ಟಗಳೇನಾದರೂ ಆದರೆ ಹರಾಜುದಾರನ ಸ್ವಂತ ಖರ್ಚಿನಿಂದ ಸರಿಪಡಿಸಬೇಕು. ಹಾಗೂ ಈ ಬಾಬ್ತು ಅನುಭವಿಸುವ ದಿನಾಂಕದವರೆಗೆ ಮುಂಗಡ ಠೇವಣಿ (ಕಾಷನ್-ಡಿಪಾಸಿಟ್) ಆಗಿ ರೂಪಾಯಿ 5,000-00 (ರೂಪಾಯಿ ಐದು ಸಾವಿರ ಮಾತ್ರ) ಹಣ ಪಾವತಿಸಬೇಕು.
5. ಹರಾಜನ್ನು ಈ ಇಲಾಖೆಯ ನಿರ್ದೇಶಕರು, ಪಶುಪಾಲನಾ ಇಲಾಖೆ, ಕರ್ನಾಟಕ, ಬೆಂಗಳೂರು-1 ರವರಿಂದ ಅಥವಾ ಇವರಿಂದ ನೇಮಿಸಲ್ಪಟ್ಟವರಿಂದ ನಡೆಸಲಾಗುವುದು. ಹರಾಜಿನ ಯಾವ ಅಂತಿಮ ನಿರ್ಧಾರವು ಹರಾಜು ನಡೆಸುವ ಅಧಿಕಾರಿಗಳಿಗೆ ಸೇರಿರುತ್ತದೆ.
6. ಹರಾಜನ್ನು ಯಾವ ಕಾರಣವನ್ನು ನೀಡದೇ ಯಾವ ಸಂದರ್ಭದಲ್ಲಾದರೂ ರದ್ದು ಮಾಡುವ ಅಧಿಕಾರ ಹರಾಜು ನಡೆಸುವ ಅಧಿಕಾರಿಗಳಿಗೆ ಸೇರಿರುತ್ತದೆ.
7. ಹೆಚ್ಚಿನ ಮಾಹಿತಿಗಾಗಿ ಉಪ ನಿರ್ದೇಶಕರು, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಇವರ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

8. ಈ ಹರಾಜಿನಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಿ ನೌಕರರು ಭಾಗವಹಿಸುವಂತಿಲ್ಲ.

**ಡಾ: ಎಂ. ಎ. ಎಜಾಜ್ ಅಹಮದ್**

ಪಿ.ಆರ್.503 ಉಪ ನಿರ್ದೇಶಕರು, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು.

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ "ಪಾರ್ಕ್‌ಹೌಸ್"**

**ತಿದ್ದುಪಡಿ ಸಂಖ್ಯೆ: ಇಪ (1) 3293/2004-05 ಪಿಎಸ್‌ಸಿ ಬೆಂಗಳೂರು, ದಿನಾಂಕ: 3ನೇ ನವೆಂಬರ್ 2004**

ಆಯೋಗದ ಅಧಿಸೂಚನೆ ಸಂಖ್ಯೆ ಇ.ಪ (1) 3064/2004-05 ದಿನಾಂಕ: 21.09.2004 ರಲ್ಲಿ ಪ್ರಕಟಿಸಲಾಗಿರುವ 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ ಬಿಜಾಪುರ ಕೇಂದ್ರಕ್ಕೆ ಸಂಬಂಧಿಸಿದಂತೆ Appendix-Aರ ಅಡಿಯಲ್ಲಿ "ರಿಜಿಸ್ಟ್ರೇಷನ್' ಶೀರ್ಷಿಕೆಯ ಕೆಳಗೆ ಪ್ರಥಮ ದರ್ಜೆ ಅಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 54556ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ ಹಾಗೂ ನಿಯಂತ್ರಕರು

ಪಿ.ಆರ್.505 ಇಲಾಖಾ ಪರೀಕ್ಷೆಗಳು ಕರ್ನಾಟಕ ಲೋಕಸೇವಾ ಆಯೋಗ.

**ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರ**

**ಕಡವು ನಿರೀಕ್ಷಕರ ಕಛೇರಿ, ಬೆಂಗಳೂರು ವಲಯ ಸರ್ಕಾರಿ ಸಾಬೂನು ಹಳೆ ಕಟ್ಟಡ, ಕೆ.ಆರ್. ವೃತ್ತ, ಬೆಂಗಳೂರು**

**ಕಡವು ನಡೆಸುವ ಹಕ್ಕಿನ ಹರಾಜು ಪ್ರಕಟಣೆ**

**ಸಂಖ್ಯೆ: ಒಜಸಾ:ಒಪಿಎ:ಕಸಂ:5:2004-05 ದಿನಾಂಕ: 2ನೇ ನವೆಂಬರ್ 2004**

ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ಕಬಿನಿ ಜಲಾಶಯದ ಹಿನ್ನೀರಿನಲ್ಲಿ ಭೀಮನಕೊಲ್ಲಿ- ಮಳಲಿ ಕಾಲೋನಿ ಮತ್ತು ಭೀಮನಕೊಲ್ಲಿ- ಮಗ್ಗೆ ಗ್ರಾಮಗಳ ನಡುವೆ ಕಪಿಲಾ ನದಿಗೆ ಅಡ್ಡಲಾಗಿ ದಿನಾಂಕ: 20.2.2005 ರಿಂದ 25.02.2005ರ ವರೆಗೆ ನಡೆಯಲಿರುವ ಶ್ರೀ ಭೀಮನಕೊಲ್ಲಿ ಮಹದೇಶ್ವರಸ್ವಾಮಿ ಜಾತ್ರಾ ಮಹೋತ್ಸವದ ಸಂದರ್ಭದಲ್ಲಿ ಸಾರ್ವಜನಿಕ ಉಪಯೋಗಕ್ಕಾಗಿ ಸ್ವಂತ ಯಂತ್ರ ಚಾಲಿತ ನಾವೆಗಳನ್ನು ಹೊಂದಿರುವವರು ಅಥವಾ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಿಂದ ನೀಡಬಹುದಾದ ಯಂತ್ರಚಾಲಿತ ನಾವೆಗಳನ್ನು ಉಪಯೋಗಿಸಿ ಕಡವು ಸೇವೆಯನ್ನು ಮೇಲ್ಕಂಡ ದಿನಾಂಕಗಳಂದು ಅಥವಾ ಇಲಾಖೆಯು ನಿಗದಿಪಡಿಸಿದ ದಿನಾಂಕದಿಂದ ನಡೆಸಿಕೊಂಡ ಹೋಗುವ ಹಕ್ಕನ್ನು ಕೆಳಗೆ ನಮೂದಿಸಿದ ಸಮಯ ಮತ್ತು ಸ್ಥಳದಲ್ಲಿ ಬಹಿರಂಗ ಹರಾಜು ಮೂಲಕ ಮಾರಾಟ ಮಾಡಲಾಗುವುದು. ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಸ್ಪರ್ಧಿಗಳು ಕೆಳಕಾಣಿಸಿದ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು.

| ಕ್ರಮ ಸಂಖ್ಯೆ | ಕಡವಿನ ಹೆಸರು | ತಾಲೂಕು: ಜಿಲ್ಲೆ | ಲೀಲಾವು ಮಾರಾಟದ ಸ್ಥಳ ಮತ್ತು ದಿನಾಂಕ | ಕಡವಿನ ಗುತ್ತಿಗೆ ಅವಧಿ | ಲೀಲಾವಿನ ಸಮಯ ಇಡಬೇಕಾದ ಠೇವಣಿ ಮೊತ್ತ | ಸರ್ಕಾರಿ ಸವಾಲು |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಭೀಮನಕೊಲ್ಲಿ ಮಳಲಿ ಕಾಲೋನಿ ಮಗ್ಗೆ | ಹೆಗ್ಗಡದೇವನ ಕೋಟೆ ತಾಲೂಕು ಮೈಸೂರು ಜಿಲ್ಲೆ | ಪ್ರಾಂತೀಯ ಕಾರ್ಯನಿರ್ವಹಣಾಧಿಕಾರಿಯವರ ಕಛೇರಿ, ಒಜಸಾ, ಸರ್ಕಾರಿ ಸಾಬೂನು ಹಳೆ ಕಟ್ಟಡ ಕೆ.ಆರ್.ವೃತ್ತ, ಬೆಂಗಳೂರು-1 14.12.2004 ಬೆಳಿಗ್ಗೆ 11.00 ಗಂಟೆಗೆ | 2005ನೇ ಇಸವಿಯಲ್ಲಿ ನಡೆಯಲಿರುವ ಜಾತ್ರಾ ಸಂದರ್ಭ (20.2.2005 ರಿಂದ 25.2.2005) 6 ದಿನಗಳು | ರೂ. 500 | ರೂ.5,000 |

**ಷರತ್ತುಗಳು:**

1. ಜಾತ್ರಾ ಅವಧಿಯಲ್ಲಿ ಉಪಯೋಗಿಸಬೇಕಾದ ನಾವೆಗಳನ್ನು ಮತ್ತು ಓ ಬಿ.ಎಂ. ಇಂಜಿನ್‌ಗಳನ್ನು ಇಲಾಖೆಯು ಸೂಚಿಸುವ ಸ್ಥಳಗಳಿಂದ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ಭೀಮನಕೊಲ್ಲಿಗೆ ಸಾಗಣೆ ಮತ್ತು ಮರು ಸಾಗಣೆಯನ್ನು ಕೈಗೊಳ್ಳತಕ್ಕದ್ದು.
2. ಕಡವು ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಸ್ಪರ್ಧಿಗಳು ಹರಾಜು ನಡೆಸುವ ಅಧಿಕಾರಿಗಳಿಗೆ ಹರಾಜು ಪ್ರಾರಂಭಿಸುವ ಮೊದಲು ಹರಾಜು ಪ್ರಕಟಣೆಯಲ್ಲಿ ತಿಳಿಸಿರುವ ಹಣವನ್ನು ಠೇವಣಿಯಾಗಿ ಇಡತಕ್ಕದ್ದು.
3. ಯಶಸ್ವಿ ಲೀಲಾವುದಾರರ ಠೇವಣಿಯನ್ನು ಅವರಿಂದ ಪಾವತಿಸಲು ಇರುವ ಸವಾಲು ಮೊತ್ತದ ಹಣಕ್ಕೆ ವಜಾ ಮಾಡಲಾಗುವುದು. ಉಳಿದವರಿಗೆ ಹರಾಜು ಮುಗಿದ ಕೂಡಲೆ ಮರಳಿಸಲಾಗುವುದು.
4. ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಗರಿಷ್ಟ ಮೊತ್ತದ ಸವಾಲುದಾರನು ಸಂಪೂರ್ಣ ಹಣವನ್ನು ಏಕ ಗಂಟಿನಲ್ಲಿ ಕೂಡಲೇ ಪಾವತಿ ಮಾಡಲು ಸಮರ್ಥರಿರಬೇಕು.
5. ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ನಿರ್ದೇಶಕರ ವಿವೇಚನೆಗೊಳಪಟ್ಟು ಕಂತುಗಳನ್ನು ನೀಡಿದಲ್ಲಿ ಸೂಕ್ತ ಬ್ಯಾಂಕ್ ಗ್ಯಾರಂಟಿಯನ್ನು ನೀಡತಕ್ಕದ್ದು.
6. ಬಹಿರಂಗ ಹರಾಜಿನಲ್ಲಿ ಬೇಡಿದ ಗರಿಷ್ಟ ಮೊತ್ತದ ಶೇಕಡಾ 10 ರಷ್ಟನ್ನು ಭದ್ರತಾ ಠೇವಣಿಯಾಗಿ ಪ್ರತ್ಯೇಕವಾಗಿ ಒಂದೇ ಗಂಟಿನಲ್ಲಿ ಲೀಲಾವಿನ ಸ್ಥಳದಲ್ಲಿ ಪಾವತಿ ಮಾಡತಕ್ಕದ್ದು.
7. ಇಂಥಹ ಸಂದರ್ಭದಲ್ಲಿ ಬೇಡಿಕೆಯ ಮೊತ್ತವನ್ನು ಒಂದೇ ಗಂಟಿನಲ್ಲಿ ಅಥವಾ ಸೂಕ್ತ ಬ್ಯಾಂಕ್ ಗ್ಯಾರಂಟಿ ನೀಡಿದಲ್ಲಿ ಪ್ರತ್ಯೇಕ ಕಂತಿನಲ್ಲಿ ನೀಡಲು ಸುಲಭ ಅವಕಾಶ ನೀಡಲಾಗುವುದು. ಇದು ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ನಿರ್ದೇಶಕರು ಯಾ ಹರಾಜು ಸಮಯ ಹಾಜರಿರುವ ಅಧಿಕಾರಿಗಳ ವಿವೇಚನೆಗೆ ಒಳಪಟ್ಟಿದೆ.

8. ಹರಾಜಿನಲ್ಲಿ ಗೆದ್ದವರು ರೂ. 15.00 ಸ್ಟಾಂಪ್ ಕಾಗದದ ಮೇಲೆ ಅಥವಾ ಚಾಲ್ತಿ ನಿಯಮದಂತೆ ಅವರ ಖರ್ಚಿನಲ್ಲಿ ಕರಾರು ಪತ್ರವನ್ನು ಕಡವು ಸೇವೆಯನ್ನು ಪ್ರಾರಂಭಿಸಲು ಮೊದಲೇ ಬರೆದುಕೊಡತಕ್ಕದ್ದು. ಈ ಕರಾರು ಪತ್ರವನ್ನು ಬರೆದುಕೊಟ್ಟ ನಂತರ ಕಡವನ್ನು ಅವರಿಗೆ ವಹಿಸಿಕೊಡಲಾಗುವುದು ಅಥವಾ ಕಡವು ನಡೆಸಲು ಅನುಮತಿ ನೀಡಲಾಗುವುದು.
9. ಕಡವು ಸೇವೆಗೆ ಉಪಯೋಗಿಸುವ ದೋಣಿಗಳನ್ನು ಕಡವು ಸೇವೆಗೆ ತೊಡಗಿಸುವ ಮೊದಲು ಕಡವು ನಿರೀಕ್ಷಕ, ಬೆಂಗಳೂರು ಅವರಿಂದ ತಪಾಸಣೆಗೆ ಒಳಪಡಿಸಿ ಸರ್ಕಾರದ ನಿಯಮಾನುಸಾರ ಲೈಸನ್ಸನ್ನು ಪಡೆಯತಕ್ಕದ್ದು.
10. ನಾವೆಗೆ ಅಗತ್ಯವಾದ ಜೀವರಕ್ಷಕ ಸಾಮಗ್ರಿಗಳನ್ನು ಒದಗಿಸತಕ್ಕದ್ದು.
11. ಇಲಾಖಾ ವತಿಯಿಂದ ಕಡವು ಸೇವೆಗೆ ನಾವೆಗಳನ್ನು ನೀಡಿದಲ್ಲಿ ಆ ನಾವೆಯ ಸುರಕ್ಷತೆಯ ಬಗ್ಗೆ ಕಡವಿನ ಗುತ್ತಿಗೆದಾರರೆ, ಇಲಾಖೆ ಯೋಗ್ಯ ಭದ್ರತೆಯನ್ನು ಸಾಲ್‌ವೆನ್ಸಿ ಪ್ರಮಾಣ ಪತ್ರ, ರಾಷ್ಟ್ರೀಯ ಉಳಿತಾಯ ಪತ್ರ ಯಾ ಬ್ಯಾಂಕ್ ಗ್ಯಾರಂಟಿ ನೀಡಿ ಮುಚ್ಚಳಿಕೆಯನ್ನು ಬರೆದು ಕೊಡತಕ್ಕದ್ದು.
12. ಕಡವಿನ ಗುತ್ತಿಗೆ ಅವಧಿ ಮುಗಿದ ನಂತರ ನಾವೆಯನ್ನು ಮೊದಲು ಗುತ್ತಿಗೆದಾರರಿಗೆ ವಹಿಸಿದ ಸ್ಥಿತಿಯಲ್ಲಿಯೇ ಇಲಾಖೆಗೆ ಹಿಂತಿರುಗಿಸತಕ್ಕದ್ದು.
13. ಇಲಾಖಾ ನಾವೆಗೆ ಯಾವುದೇ ಜಖಂ, ಹಾನಿ ಆದಲ್ಲಿ ಆ ಬಗ್ಗೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ.
14. ಇಲಾಖೆಯು ನೀಡುವ ನಾವೆಯನ್ನು ಕೇವಲ ಪ್ರಯಾಣಿಕರ ಸಾಗಾಟಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು ವಿನಃ ಮರಳು ಸಾಮಗ್ರಿಗಳನ್ನು ಸಾಗಿಸಲು ಉಪಯೋಗಿಸತಕ್ಕದ್ದಲ್ಲ. ಈ ಬಗ್ಗೆ ದುರುಪಯೋಗ ಗಮನಕ್ಕೆ ಬಂದಲ್ಲಿ ಅಂಥಹ ಗುತ್ತಿಗೆದಾರರನ್ನು ಗುತ್ತಿಗೆಯಿಂದ ಅನರ್ಹಗೊಳಿಸಿ ನಾವೆಯನ್ನು ಮರಳಿ ಪಡೆದು ಬೇರೆ ವ್ಯವಸ್ಥೆ ಮಾಡಲಾಗುವುದು. ಈ ಬಗ್ಗೆ ಸರ್ಕಾರಕ್ಕೆ ಉಂಟಾಗಬಹುದಾದ: ಉಂಟಾದ ಹಾನಿ: ನಷ್ಟಕ್ಕೆ ಗುತ್ತಿಗೆದಾರರು ಜವಾಬ್ದಾರರಾಗುವರು.
15. ಕಡವಿನಲ್ಲಿ ವಸೂಲು ಮಾಡುವ ಹಾಸಲು ದರಗಳ ಸೂಚನಾ ಫಲಕವನ್ನು ಕಡವು ನಡೆಸುವ ಸ್ಥಳಗಳನ್ನು ಬಹಿರಂಗವಾಗಿ ಪ್ರಕಟಿಸತಕ್ಕದ್ದು.
16. ಕಡವನ್ನು ಸರಕಾರದ ಕರಾರು ಒಪ್ಪಂದದ ನಿಯಮಗಳಿಗೆ ಅನುಸಾರವಾಗಿ ನಡೆಸತಕ್ಕದ್ದು ಮತ್ತು ಇದಕ್ಕೆ ತಪ್ಪಿದಲ್ಲಿ ಹರಾಜಿನಲ್ಲಿ ಗೆದ್ದವರು ಪಡೆದ ಹಕ್ಕನ್ನು ಮತ್ತು ಕಟ್ಟಿದ ಹಣವನ್ನು ಕಳೆದುಕೊಳ್ಳುವರು ಇದರಿಂದಾಗಿ ಸರ್ಕಾರಕ್ಕೆ ಆಗುವ ನಷ್ಟಕ್ಕೆ ಅವರೇ ಜವಾಬ್ದಾರರಾಗಿರುತ್ತಾರೆ.
17. ಒಂದು ವೇಳೆ ಮೇಲಿನ ಷರತ್ತುಗಳನ್ನು ಪಾಲಿಸುವಲ್ಲಿ ಸ್ಪರ್ಧಿಗಳು ಅಸಮರ್ಥರಾದಲ್ಲಿ ಲಿಲಾವನ್ನು ಕೂಡಲೇ ರದ್ದುಪಡಿಸಿ ಪುನಃ ಲಿಲಾವು ಮಾಡಲಾಗುವುದು, ಇದರಿಂದ ಸರ್ಕಾರಕ್ಕೆ ನಷ್ಟವಾದಲ್ಲಿ ಅವರನ್ನೇ ಜವಾಬ್ದಾರರನ್ನಾಗಿ ಮಾಡಲಾಗುವುದು.
18. ಹರಾಜು ಮಾರಾಟವನ್ನು ಖಾಯಂಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವು ಕರ್ನಾಟಕ ರಾಜ್ಯ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ನಿರ್ದೇಶಕರಿಗೆ ಸೇರಿರುತ್ತದೆ.
19. ನಾವೆಗಳ ಸುಗಮ ಓಡಾಟಕ್ಕೆ ತಗಲುವ ಇಂಧನ ಮತ್ತು ಇತರ ನಿರ್ವಹಣಾ ವೆಚ್ಚವನ್ನು ಗುತ್ತಿಗೆದಾರರೇ ಭರಿಸತಕ್ಕದ್ದು.
20. ನಾವೆಗಳು ಮತ್ತು ಇಂಜಿನ್‌ಗಳನ್ನು ಸುರಕ್ಷಿತವಾಗಿ ನಿರ್ವಹಿಸುವ ಜವಾಬ್ದಾರಿಯು ಗುತ್ತಿಗೆದಾರರದಾಗಿರುತ್ತದೆ.
21. ಯಂತ್ರಚಾಲಿತ ನಾವೆಗಳನ್ನು ನಡೆಸುವ ಸಂದರ್ಭದಲ್ಲಿ ಅದಿಕೃತ ಲೈಸೆನ್ಸ್ ಹೊಂದಿರುವ ಸಿಬ್ಬಂದಿಯಿಂದಲೇ ನಡೆಸತಕ್ಕದ್ದು.
22. ನಾವೆಗಳ ರಾತ್ರಿ ಸಂಚಾರವನ್ನು ನಿಷೇಧಿಸಲಾಗಿದೆ.
23. ನಾವೆಗಳ ಸಂಚಾರ ಮತ್ತು ನಿರ್ವಹಣೆ ಹಾಗೂ ಸುರಕ್ಷತೆಯಲ್ಲಿ ಇಲಾಖೆಯ ಅಧಿಕಾರಿಗಳು ಕೈಗೊಳ್ಳುವ ತೀರ್ಮಾನಕ್ಕೆ ಗುತ್ತಿಗೆದಾರರು ಬದ್ಧರಾಗಿರತಕ್ಕದ್ದು.

**ಪಿ. ಆರ್. ಎಂ. ಶರ್ಮ**

ಪಿ.ಆರ್.506 ಕಡವು ನಿರೀಕ್ಷಕ, ಬೆಂಗಳೂರು ವಲಯ, ಬೆಂಗಳೂರು.

## PUBLIC WORKS DEPARTMENT
## (NATIONAL HIGHWAY)
**Office of the Executive Engineer, NH Division, # 14/3 4th Floor, CFC Building, Nrupathunga Road, Bangalore**

**No. EE/NHDB/AE2/NIT/12/2004-05 Dated 5th October 2004**

## TENDER NOTIFICATION 12/2004-05
## (TWO COVER SYSTEM)

Sealed Item Rate Tenders for the works noted below under TWO COVER BID SYSTEM as per Karnataka Transparency in Public Procurement Act 2000 in prescribed form in duplicate is invited from the Class-I contractors registered in KPWD/MORT&H approved Firms. Two cover bid system of tendering consists of Technical Bid and Financial Bid. These two covers shall be sealed and kept in another sealed cover duly super scribing name of work and shall be addressed to the undersigned with name and full postal addresses of the bidder. Completed bids will be received in the Office of the Superintending Engineer, National Highway Circle, Bangalore or in the Office of the Executive Engineer, National Highway Division, Bangalore up to 4.00 P.M. on 20.11.2004, subject to the conditions laid down in form PWG 65, 66 of KPWD code Vol II, Special Conditions contained in the schedules and in Karnataka Transparency in Public Procurement Act 2000. The Technical Bids will be opened by the undersigned on the dates noted below. Financial Bids of only those bidders who qualify in the Technical Bid shall be opened. If any one of the dates mentioned below happens to be General Holiday, the next convenient day will be intimated.

| Sl. No. | Name of Work | Amount put to Tender Rs in Lakhs | EMD in Rs | Cost of Tender Forms (in Rs) Non refundable including taxes | Nature of work | Time for completion of work (Excluding monsoon) |
|---|---|---|---|---|---|---|
| 1 | 2 | 3 | 4 | 5 | 6 | 7 |

| 1 | 2 | 3 | 4 | 5 | 6 | 7 |
|---|---|---|---|---|---|---|
| 1 | Improvements and Asphalting to Road from Harohalli Anekal Road Bangalore Rural District. | 57.00 | 57,000/- | Rs 15,000/- +8% ST +10% SC on ST | Asphalting | 4 Months |
| 2 | Improvements to Gundlupet Chamarajnagar road in Km 14.50 to Km 32.50 in selected reaches. | 67.00 | 67000/- | Rs 15,000/- +8% ST +10% SC on ST | Asphalting | 4 Months |
| 3 | Improvements to Ramanagar Jalamangala via Road Belagumba Arehalli to Konamaranahalli in selected reaches in Bangalore Rural District. | 67.00 | 67000/- | Rs 15,000/- +8% ST +10% SC on ST | Asphalting | 4 Months |
| 4 | Improvements & Asphalting to Gadasahalli to Singarajapura via Venkatanaryanadoddi in selected reaches in Bangalore Rural District. | 57.00 | 57000/- | Rs 15,000/- +8% ST +10% SC on ST | Asphalting | 4 Months |
| 5 | Improvements to Road from KGF road in selected reaches in Kolar District. | 67.00 | 67000/- | Rs 15,000/- +8% ST +10% SC on ST | Asphalting | 4 Months |

**GENERAL CONDITIONS:**

1. The contractors interested in bidding for the work may submit an application to the undesigned along with cost of tender documents (non refundable) to be paid in cash or in the form of DD drawn in favour of Executive Engineer, National Highway Division, Bangalore Payable at Bangalore along with application. The applicants should submit proof of registration, latest income tax clearance certificate and Karnataka sales tax clearance certificate obtained from the concerned Departments, relevant experience certificate issued by the officer not below the rank of Executive Engineer and contractors pass book, while submitting the applications for tender schedules, otherwise the application will not be considered.
2. The Schedule of dates is as under;
   (a) Last date for receipt of application Up to 4.00 P.M. : 16-11-2004
   (b) Issue of Blank tender schedules Up to 4.00 P.M. : 18-11-2004
   (c) Last date for submission of Tenders Up to 4.00 P.M. : 20.11.2004
   (d) Opening of Technical Bid @ 4.30 P.M : 20-11-2004 (If Possible)

**CONDITIONS FOR TECHNICAL BIDS:**

1. The EMD in the form of DD/FDR/Pay Order/Shall be enclosed in the Technical Bid. All types of EMD should be valid for **180 days from the date of opening** fixed for tender other wise such tenders will be rejected.
2. The defect liability period for the work in this notification will be (i) three years (in case of strengthening, widening with strengthening, IRQP works) (ii) Two years (in case of new formation not involving strengthening course, widening, Periodical Renewals works) & (iii) Five years (Incase of bridge and Culverts) reckoned from the date of completion of the work. The item of works to be executed being of very high standards shall not require any repairs for three years after completion of the same. If the stretch/structure notified above require any repair during defect liability period as above, the contractor/firm shall re-do the same at contractor's/ firm own cost. The EMD/SD tools shall be accordingly produced.
3. Each tenderer shall own following machinery and enclose with the Technical Bid evidence of ownership, as detailed under. The technical bids submitted without evidence of owner ship as detailed are liable for disqualification.

| Sl. No. | Machinery | Numbers | Evidence of Ownership to be furnished. |
|---|---|---|---|
| 1 | HMP 40/60 TPH | One | Copy of Purchase invoice/Sale deed with a copy of purchase invoice from the seller. |
| 2 | Mechanical Paver Finisher | One | ........................Do........................ |
| 3 | Vibratory Road Roller | One | ........................Do........................ |
| 4 | Static Road Roller | Two | ........................Do........................ |
| 5 | Mechanical Sprayer | Two | ........................Do........................ |
| 6 | Tippers | Four | Registration certificate with fitness certificate issued by R.T.O. |

4. Each Tender should have individually satisfactorily completed any one work of similar nature of value not less than 30% of the value of work in this notification (Updated at 10% per annum compoundable) in any one financial year during a block period of previous five years. Alternatively, the contractor should have completed a billing of 30% of the value of work in this notification, during the current financial year for same nature of work. The experience certificate in this regard should invariably have mention of nature/items of work executed, along with date of commencement and date of completion, otherwise the technical bid is liable for disqualification.
5. For proof of Financial Capacity Line Of Credit from any Scheduled Bank shall be invariably produced for the particular work in the proforma prescribed in the technical Bid for an amount equal to 30% of the amount put to tender. Failure to submit the Line of Credit along with technical Bid lead to disqualification.
6. All documents enclosed in support of technical bids, shall be attested by a Gazetted officer not below the rank of District Level Officer, otherwise the bids are laible for disqualification. The original documents should be produced for verification at any stage of tender process as and when sought for. Failure to produce original documents leads to disqualification of technical bids.
7. Only relevant certificates and details shall be furnished with the technical bid. Details of Company/ Agencies/Firms profile be enclosed.
8. Tendering by Joint Venture is not allowed.
9. The Competent authority reserves the right to reject any or all the tenders without assigning any reasons.
10. Conditional tenders will not be accepted.

Any other details regarding the work can be obtained from the above office during office hours.

PR-507 Executive Engineer, NH Division, Bangalore.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಪ್ರಾದೇಶಿಕ ಅರಣ್ಯ ವಿಭಾಗ, ತುಮಕೂರು**

**ಅರಣ್ಯ ಕಾಮಗಾರಿಗಳ ಟೆಂಡರ್ ಸಂಖ್ಯೆ: ಎಅಕಾ:ಟೆಂಡರ್:ವಿವ:21:2004-05 ದಿನಾಂಕ: 6ನೇ ನವೆಂಬರ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2004-05ನೇ ಸಾಲಿನಲ್ಲಿ ತುಮಕೂರು ಪ್ರಾದೇಶಿಕ ಅರಣ್ಯ ವಿಭಾಗದ ವ್ಯಾಪ್ತಿಗೆ ಒಳಪಡುವ ವಲಯಗಳಲ್ಲಿನ ಈ ಕೆಳಕಂಡ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ 2004-05ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಪ್ರತಿಯೊಂದು ಕಾಮಗಾರಿಗೆ ಪ್ರತ್ಯೇಕ ವಲಯವಾರು ಮೊಹರಾದ ಪ್ರತಿ ಕಾಮಗಾರಿಗೆ ಶೇಕಡವಾರು ಟೆಂಡರ್ ಕರೆಯಲಾಗಿದೆ.

ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 13.12.2004 ರಂದು 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ ತುಮಕೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು. ದಿನಾಂಕ: 13.12.2004 ರಂದು ಯಾವ ಕಾಮಗಾರಿಗೂ ಟೆಂಡರುಗಳು ಬಾರದಿದ್ದಲ್ಲಿ ಮತ್ತೆ ಎರಡನೆ ಬಾರಿಗೆ ದಿನಾಂಕ: 17.12.2004 ರಂದು 3.00 ಗಂಟೆಗೆ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು. ಎರಡನೆ ಬಾರಿಗೂ ಟೆಂಡರುಗಳು ಬಾರದಿದ್ದಲ್ಲಿ ಮೂರನೇ ಬಾರಿಗೆ 21.12.2004 ರಂದು 3.00 ಗಂಟೆಗೆ ವಿಭಾಗ ಕಛೇರಿಯಲ್ಲಿ ಟೆಂಡರುಗಳನ್ನು ಸ್ವೀಕರಿಸಲಾಗುವುದು ಮತ್ತೆ ಪ್ರತ್ಯೇಕವಾಗಿ ಪ್ರಕಟಣೆ ನೀಡಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಯೋಜನೆ | ಸ್ಥಳ ಮತ್ತು ಕಾಮಗಾರಿಯ ವಿವರ (2005ನೇ ಮಳೆಗಾಲದಲ್ಲಿ) ನೆಡುತೋಪು ಬೆಳೆಸಲು ಮುಂಗಡವಾಗಿ ಪಿಟ್ಸ್, ಸಿಪಿಟಿ ತೆಗೆಯುವುದು ಮತ್ತು ರಿಪ್ಪಿಂಗ್ ಮಾಡುವುದು ಇತ್ಯಾದಿ | ಮಾದರಿ | ಭೌತಿಕ ಪರಿಮಾಣ ಹೆ./ ಕಿ.ಮೀ. | ಅಂದಾಜು ಮೊತ್ತ (ರೂ.ಗಳಲ್ಲಿ) | ನಿಗದಿಪಡಿಸಿದ ಎಂಡಿ ಮೊತ್ತ (ರೂ.ಗಳಲ್ಲಿ) |
|---|---|---|---|---|---|---|
| | | I) ಮಧುಗಿರಿ ವಲಯ, ಬಡವನಹಳ್ಳಿ ಮೀ.ಅ. | | | | |
| 1 | ಬೇರಿ | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers | Energy Forest | 4 | 30600 | 800 |

| ಕ್ರ. ಸಂ. | ಯೋಜನೆ | ಸ್ಥಳ ಮತ್ತು ಕಾಮಗಾರಿಯ ವಿವರ (2005ನೇ ಮಳೆಗಾಲದಲ್ಲಿ) ನೆಡುತೋಪು ಬೆಳೆಸಲು ಮುಂಗಡವಾಗಿ ಪಿಟ್ಸ್, ಸಿಪಿಟಿ ತೆಗೆಯುವುದು ಮತ್ತು ರಿಪ್ಪಿಂಗ್ ಮಾಡುವುದು ಇತ್ಯಾದಿ | ಮಾದರಿ | ಭೌತಿಕ ಪರಿಮಾಣ ಹೆ./ ಕಿ.ಮೀ. | ಅಂದಾಜು ಮೊತ್ತ (ರೂ.ಗಳಲ್ಲಿ) | ನಿಗದಿಪಡಿಸಿದ ಎಂಡಿ ಮೊತ್ತ (ರೂ.ಗಳಲ್ಲಿ) |
|---|---|---|---|---|---|---|
| | | ಬಡವನಹಳ್ಳಿ ಮೀ. ಅ. | | 81 | 487600 | 12200 |
| | | ii) 146200 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು | | | | |
| | | (Ripping along contours at an interval of 2 meters to a depth of 75 cm, with a ripper attached to 220 HP D-80 buldozer. The ripper having side flange attachment, which will rip open the trench to a width of 45 cm) | | | | |
| | | iii) ಸಿಪಿಟಿ ತೆಗೆಯುವುದು | | 5.90 | 286100 | 7200 |
| | | ಮುದ್ದಪ್ಪನಹಳ್ಳಿ ಗೋಮಾಳ ಸ.ನಂ. 25 ಪಿ-1 | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP D-80 buldozers | | 1 | 7700 | 200 |
| | | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು | | 24 | 144500 | 3600 |
| | | (Ripping along contours at an interval of 2 meters to a depth of 75 cm, with a ripper attached to 220 HP D-80 buldozer. The ripper having side flange attachment, which will rip open the trench to a width of 45 cm) | | | | |
| | | iii) ಸಿಪಿಟಿ ತೆಗೆಯುವುದು | | 1.75 | 84200 | 2100 |
| | | ಗುಡ್ಡೇನಹಳ್ಳಿ ಗೋಮಾಳ ಸ.ನಂ. 134 | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP D-80 buldozers | | 1 | 7700 | 200 |
| | | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು | | 24 | 144500 | 3600 |
| | | (Ripping along contours at an interval of 2 meters to a depth of 75 cm, with a ripper attached to 220 HP D-80 buldozer. The ripper having side flange attachment, which will rip open the trench to a width of 45 cm) | | | | |

| ಕ್ರ. ಸಂ. | ಯೋಜನೆ | ಸ್ಥಳ ಮತ್ತು ಕಾಮಗಾರಿಯ ವಿವರ (2005ನೇ ಮಳೆಗಾಲದಲ್ಲಿ) ನೆಡುತೋಪು ಬೆಳೆಸಲು ಮುಂಗಡವಾಗಿ ಪಿಟ್ಸ್, ಸಿಪಿಟಿ ತೆಗೆಯುವುದು ಮತ್ತು ರಿಪ್ಪಿಂಗ್ ಮಾಡುವುದು ಇತ್ಯಾದಿ | ಮಾದರಿ | ಭೌತಿಕ ಪರಿಮಾಣ ಹೆ./ ಕಿ.ಮೀ. | ಅಂದಾಜು ಮೊತ್ತ (ರೂ.ಗಳಲ್ಲಿ) | ನಿಗದಿಪಡಿಸಿದ ಎಂಡಿ ಮೊತ್ತ (ರೂ.ಗಳಲ್ಲಿ) |
|---|---|---|---|---|---|---|
| | | iii) ಸಿಪಿಟಿ ತೆಗೆಯುವುದು | | 1.75 | 84200 | 2100 |
| | | ಮಾದೇನಹಳ್ಳಿ ಗೋಮಾಳ ಸ.ನಂ.134 | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP D-80 buldozers | | 2 | 15300 | 400 |
| | | ii) 86000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು | | 48 | 289000 | 7200 |
| | | (Ripping along contours at an interval of 2 meters to a depth of 75 cm, with a ripper attached to 220 HP D-80 buldozer. The ripper having side flange attachment, which will rip open the trench to a width of 45 cm) | | | | |
| | | ii) ಸಿಪಿಟಿ ತೆಗೆಯುವುದು | | 50/3.50 | 168300 | 4200 |
| | | ಮುದ್ದಪ್ಪನಹಳ್ಳಿ ಗೋಮಾಳ ಸ.ನಂ.25/ P1 | ANR | | | |
| | | iii) ಸಿಪಿಟಿ ತೆಗೆಯುವುದು | | 20/1.4km | 67300 | 1700 |
| | | ಪಿಟ್ಸ್/ ಗುಂಡಿ ತೆಗೆಯುವುದು | | 20/500 | 7800 | 200 |
| | | ಗುಡ್ಡೇನಹಳ್ಳಿ ಗೋಮಾಳ ಸ.ನಂ.14 | | | | |
| | | ಸಿಪಿಟಿ ತೆಗೆಯುವುದು | | 20/1.4km | 67300 | 1700 |
| | | ಪಿಟ್ಸ್/ ಗುಂಡಿ ತೆಗೆಯುವುದು | | 20/500 | 7800 | 200 |
| | | ಮಾದೇನಹಳ್ಳಿ ಗೋಮಾಳ ಸ.ನಂ.134 | | | | |
| | | ಸಿಪಿಟಿ ತೆಗೆಯುವುದು | | 20/1.4km | 67300 | 1700 |
| | | ಪಿಟ್ಸ್/ ಗುಂಡಿ ತೆಗೆಯುವುದು | | 20/500 | 7800 | 200 |
| | | II ಶಿರಾ ವಲಯ | | | | |
| | | ಚಿಕ್ಕಸೀಬಿ Section 4 Notified area | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP D-80 buldozers | Energy Forest | 1 | 7700 | 200 |
| | | ii) 34400 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು | | 19 | 114400 | 2800 |
| | | (Ripping along contours at an interval of 2 meters to a depth of 75 cm, with a ripper attached to 220 HP D-80 buldozer. The ripper having side flange attachment, which will rip open the trench to a width of 45 cm) | | | | |

| ಕ್ರ. ಸಂ. | ಯೋಜನೆ | ಸ್ಥಳ ಮತ್ತು ಕಾಮಗಾರಿಯ ವಿವರ (2005ನೇ ಮಳೆಗಾಲದಲ್ಲಿ) ನೆಡುತೋಪು ಬೆಳೆಸಲು ಮುಂಗಡವಾಗಿ ಪಿಟ್ಸ್, ಸಿಪಿಟಿ ತೆಗೆಯುವುದು ಮತ್ತು ರಿಪ್ಪಿಂಗ್ ಮಾಡುವುದು ಇತ್ಯಾದಿ | ಮಾದರಿ | ಭೌತಿಕ ಪರಿಮಾಣ ಹೆ./ ಕಿ.ಮೀ. | ಅಂದಾಜು ಮೊತ್ತ (ರೂ.ಗಳಲ್ಲಿ) | ನಿಗದಿಪಡಿಸಿದ ಎಂಡಿ ಮೊತ್ತ (ರೂ.ಗಳಲ್ಲಿ) |
|---|---|---|---|---|---|---|
| | | iii) ಸಿಪಿಟಿ ತೆಗೆಯುವುದು | | 20/1.4 | 67300 | 1700 |
| | | ಹಾಲ್‌ದೊಡ್ಡೇರಿ ಗೋಮಾಳ | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP D-80 buldozers | Energy Forest | 1 | 7700 | 200 |
| | | ii) 34400 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು | | 19 | 114400 | 2800 |
| | | (Ripping along contours at an interval of 2 meters to a depth of 75 cm, with a ripper attached to 220 HP D-80 buldozer. The ripper having side flange attachment, which will rip open the trench to a width of 45 cm) | | | | |
| | | iii) ಸಿಪಿಟಿ ತೆಗೆಯುವುದು | | 20/1.4 | 67300 | 1700 |
| | | 3) ಚಿಕ್ಕಸೀಬಿ | | | | |
| | | i) ಸಿಪಿಟಿ ತೆಗೆಯುವುದು | ANR | 60 | 202000 | 5000 |
| 3 | | ii) ಪಿಟ್ಸ್ ಅಗೆತ ಮಾಡುವುದು | 60ha/1500 | | 23500 | 600 |
| | | ಹುಂಜನಾಳ ಗೋಮಾಳ | | | | |
| | | i) ಸಿಪಿಟಿ ತೆಗೆಯುವುದು | | 30 | 101000 | 2500 |
| | | ii) ಪಿಟ್ಸ್ ಅಗೆತ ಮಾಡುವುದು | 30ha/750 | | 11800 | 300 |
| | | **III) ಗುಬ್ಬಿ ವಲಯ** | | | | |
| | | i) ಬೋಡತಿಮ್ಮನಹಳ್ಳಿ ಅಂಕಸಂದ್ರ ಮೀ.ಅ | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP D-80 buldozers | Energy Forest | 5 | 38300 | 1000 |
| | | ii) 172000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು | | 95 | 571900 | 14300 |
| | | (Ripping along contours at an interval of 2 meters to a depth of 75 cm, with a ripper attached to 220 HP D-80 buldozer. The ripper having side flange attachment, which will rip open the trench to a width of 45 cm) | | | | |
| | | i) ಸಿಪಿಟಿ ತೆಗೆಯುವುದು | 100ha/7Km | | 336600 | 8400 |
| | | i) ಕುರುಬರಹಳ್ಳಿ, ಅಂಕಸಂದ್ರ ಮೀ.ಅ. | 01 | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP D-80 buldozers | Energy Forest | 2 | 15300 | 400 |

| ಕ್ರ. ಸಂ. | ಯೋಜನೆ | ಸ್ಥಳ ಮತ್ತು ಕಾಮಗಾರಿಯ ವಿವರ (2005ನೇ ಮಳೆಗಾಲದಲ್ಲಿ) ನೆಡುತೋಪು ಬೆಳೆಸಲು ಮುಂಗಡವಾಗಿ ಪಿಟ್ಸ್, ಸಿಪಿಟಿ ತೆಗೆಯುವುದು ಮತ್ತು ರಿಪ್ಪಿಂಗ್ ಮಾಡುವುದು ಇತ್ಯಾದಿ | ಮಾದರಿ | ಭೌತಿಕ ಪರಿಮಾಣ ಹೆ./ ಕಿ.ಮೀ. | ಅಂದಾಜು ಮೊತ್ತ (ರೂ.ಗಳಲ್ಲಿ) | ನಿಗದಿಪಡಿಸಿದ ಎಂಡಿ ಮೊತ್ತ (ರೂ.ಗಳಲ್ಲಿ) |
|---|---|---|---|---|---|---|
| | | ii) 86000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು | | 48 | 289000 | 7200 |
| | | (Ripping along contours at an interval of 2 meters to a depth of 75 cm, with a ripper attached to 220 HP D-80 buldozer. The ripper having side flange attachment, which will rip open the trench to a width of 45 cm) | | | | |
| | | i) ಸಿಪಿಟಿ ತೆಗೆಯುವುದು | 50ha/3.50Km | | 168300 | 4200 |
| | | 3) ಸಿರಿವಲ್ಲೇಹಳ್ಳಿ ಅಂಕಸಂದ್ರ ಮೀ.ಅ. | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP D-80 buldozers | Energy Forest | 1 | 7700 | 200 |
| | | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು | | 24 | 144500 | 3600 |
| | | (Ripping along contours at an interval of 2 meters to a depth of 75 cm, with a ripper attached to 220 HP D-80 buldozer. The ripper having side flange attachment, which will rip open the trench to a width of 45 cm) | | | | |
| | | i) ಸಿಪಿಟಿ ತೆಗೆಯುವುದು | 25ha/1.75Km | | 84200 | 2100 |

**ನಿಬಂಧನೆಗಳು**

1. ಟೆಂಡರ್ ಫಾರಂನ್ನು ಟೆಂಡರ್ ದಿನಾಂಕದಂದು ಅಪರಾಹ್ನ 1.00 ಗಂಟೆಯವರೆಗೆ ರೂ. 200-00 ಮತ್ತು ತೆರಿಗೆ ಪಾವತಿ ಮಾಡಿ ಪಡೆಯಬಹುದಾಗಿದೆ. ಭರ್ತಿ ಮಾಡಿದ ಟೆಂಡರ್ ಫಾರಂನ್ನು ಸಂಬಂಧಪಟ್ಟ ವಲಯಕ್ಕೆಂದು ನಮೂದಿಸಿ ಈ ಕಛೇರಿಯಲ್ಲಿ ಇಟ್ಟಿರುವ ಮೊಹರಾದ ಪೆಟ್ಟಿಗೆಯಲ್ಲಿ ಮಧ್ಯಾಹ್ನ 3.00 ಗಂಟೆಯವರೆಗೆ ಹಾಕಬಹುದಾಗಿದೆ.
2. ಭರ್ತಿ ಮಾಡಿದ ಟೆಂಡರುಗಳನ್ನು ವಲಯವಾರು ಮತ್ತು ಕೆಲಸವಾರು ಸಲ್ಲಿಸಬೇಕು ಹಾಗೂ ದರವನ್ನು ನಮೂದಿಸುವಾಗ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಇವರು 2004-05ನೇ ಸಾಲಿಗೆ ಮಂಜೂರಾದ ಎಸ್.ಎಸ್.ಆರ್. ದರಕ್ಕೆ ಶೇಕಡವಾರು ಇಂತಿಷ್ಟು ಹೆಚ್ಚು ಸಮ ಅಥವಾ ಕಡಿಮೆ ಎಂದು ನಮೂದಿಸಬೇಕು.
3. ಸ್ವೀಕರಿಸಲಾದ ಟೆಂಡರುಗಳನ್ನು ಆಯಾ ದಿನಾಂಕಗಳಂದು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಅಪರಾಹ್ನ 4.00 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ತೆಗೆಯಲಾಗುವುದು.
4. ಈ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿದ್ದು ಅವುಗಳನ್ನು ಋತುಮಾನಕ್ಕೆ ಅನುಗುಣವಾಗಿ (ಕಾಲಬದ್ಧ) ಆಯಾ ವಲಯ ಅರಣ್ಯ ಅಧಿಕಾರಿಗಳ ನಿರ್ದೇಶನದ ಮೇಲೆ ಜಾರಿಗೊಳಿಸಲು ಬದ್ಧರಾಗಿರಬೇಕು. ಸದರಿ ಕೆಲಸಗಳು ಕಾಲಬದ್ಧವಾಗಿದ್ದು ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್ ಮುಂಚೆ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತು ಪಡಿಸಿದವುಗಳಾಗಿರುತ್ತವೆ.
5. ಪ್ರತಿ ಟೆಂಡರ್‌ದಾರರು ಕಾಮಗಾರಿಗಳನ್ನು ನಿರ್ವಹಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳನ್ನು ಸ್ವಂತವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವವರು ಆಯಾ ಕೆಲಸಕ್ಕೆ ನಿಗದಿಪಡಿಸಿದ ಇಎಂಡಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರ ಹೆಸರಿಗೆ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಪಾವತಿಸಬೇಕು.
7. ಗುತ್ತಿಗೆದಾರರು ಸಲ್ಲಿಸುವ ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

8. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರು ಕಾಯ್ದಿರಿಸಿಕೊಂಡಿದ್ದಾರೆ.
9. ಸರ್ಕಾರದಿಂದ ಅನುದಾನವು ತುಮಕೂರು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಗೆ ತಲುಪಿದ ನಂತರವೇ ಪಾವತಿ ಮಾಡಲಾಗುವುದು.
10. ಈ ಮೇಲಿನ ಕಾಮಗಾರಿಗಳ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಬಿಡುಗಡೆಗೊಳ್ಳುವ ಅನುದಾನ ಮತ್ತು ಅನುಮೋದನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷದಲ್ಲಿ ಸರ್ಕಾರದಿಂದ ಹಣ ಬಿಡುಗಡೆಯಾಗುವುದು ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
11. ಈ ಅರಣ್ಯ ಕಾಮಗಾರಿಗಳು ಕಾಲಬದ್ಧ ಕಾಮಗಾರಿಗಳಾಗಿದ್ದು, ಅವುಗಳನ್ನು ಕಾಲಮಿತಿ ಮತ್ತು ನಿಗದಿತ ಸಮಯಗಳಲ್ಲಿ ಕಾಮಗಾರಿಗಳನ್ನು ನಿರ್ವಹಿಸಲು ವಿಫಲರಾದಲ್ಲಿ ಅಂತಹ ಕಾಮಗಾರಿಗಳನ್ನೂ ಇಲಾಖೆ ಮೂಲಕ ನಿರ್ವಹಿಸಲಾಗುವುದು ಹಾಗೂ ಇಎಂಡಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಇಲಾಖಾ ಮೂಲಕ ನಿರ್ವಹಿಸಿದಲ್ಲಿ ಹೆಚ್ಚು ವೆಚ್ಚವಾದರೆ ಅದನ್ನು ಸಂಬಂಧಪಟ್ಟವರಿಂದ ವಸೂಲಿ ಮಾಡಲಾಗುವುದು.
12. ವಿಜೇತ ಟೆಂಡರ್‌ದಾರರು ಆದೇಶದ 7 ದಿನಗಳೊಳಗಾಗಿ ಕರಾರನ್ನು ಚಾಲ್ತಿ ದರ ಛಾಪಾ ಕಾಗದದ ಮೇಲೆ ತುಮಕೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಸಮಕ್ಷಮದಲ್ಲಿ ಮಾಡಿಕೊಳ್ಳತಕ್ಕದ್ದು.
13. ಕೆಲಸಗಳನ್ನು ಆಯಾಯ ಉಪವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರ ಪರಿಶೀಲನೆ ಹಾಗೂ ದೃಢೀಕರಣವನ್ನು ಅನುಸರಿಸಿ ಬಿಲ್ಲನ್ನು ಪಾವತಿ ಮಾಡಲಾಗುವುದು ಹಾಗೂ ಪಾವತಿಸುವ ಶೇ. 2 ರಷ್ಟು ಹಣವನ್ನು ಆದಾಯ ತೆರಿಗೆ ಬಾಬ್ತು ಹಿಡಿಯಲಾಗುವುದು ಮತ್ತು 2.5 ರಷ್ಟು ಭದ್ರತಾ ಠೇವಣಿ ಹಿಡಿಯಲಾಗುವುದು. ಕಾಲಬದ್ಧ ಕೆಲಸಗಳ ಬಾಬ್ತು ಸರ್ಕಾರವು ನಿಗದಿಪಡಿಸಿದ ಇತರೆ ತೆರಿಗೆಗಳನ್ನು ಸಂಬಂಧಪಟ್ಟ ಬಿಲ್ಲುಗಳಲ್ಲಿ ಕಟಾಯಿಸಲಾಗುವುದು.
14. ಯಾವುದೇ ತಕರಾರಿನ ಬಗ್ಗೆ ತುಮಕೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು. ಅವರ ಆದೇಶವು ಅಧೀನಾಧಿಕಾರಿಗಳಿಗೆ ಹಾಗೂ ಗುತ್ತಿಗೆದಾರರಿಗೆ ಪಾಲನಾರ್ಹವಾದುದು.
15. ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಆದೇಶದ ಬಗ್ಗೆ ತೃಪ್ತಿಯಿಲ್ಲವಾದರೆ ಹಾಸನ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.
16. ಕಾಮಗಾರಿ ಸ್ಥಳಗಳು ತಾತ್ಕಾಲಿಕವಾಗಿದ್ದು ಅವುಗಳ ಸ್ಥಳ ಬದಲಾವಣೆಗಳಾಗುವ ಸಂಭವವಿರುತ್ತದೆ. ಹೆಚ್ಚಿನ ಮಾಹಿತಿಗಾಗಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.
17. ಕೆಲಸದ ಪರಿಮಾಣ ಎನರ್ಜಿ ಫಾರೆಸ್ಟ್ ಮತ್ತು ಅಸಿಸ್ಟೆಂಟ್ ನ್ಯಾಚುರಲ್ ರೀಜನರೇಶನ್ ಕ್ರಮವಾಗಿ 150 ಮತ್ತು 50 ಹೆ.ನಷ್ಟು ಹೆಚ್ಚಿಸುವ ಸಾಧ್ಯತೆಯಿದ್ದು, ಹೆಚ್ಚುವರಿಯಾದ ಕೆಲಸವನ್ನು ಸಹ ಒಪ್ಪಿಗೆಯಾದ ಟೆಂಡರಿನ ದರದಲ್ಲಿ ಆಯಾ ವಲಯ ಅರಣ್ಯಾಧಿಕಾರಿಗಳು ಸೂಚಿಸುವ ಜಾಗದಲ್ಲಿಯೇ ಮಾಡತಕ್ಕದ್ದು.
18. ಕರ್ನಾಟಕ ಅರಣ್ಯ ಕಾಯ್ದೆ ಕರ್ನಾಟಕ ಅರಣ್ಯ ಸಂಹಿತೆ, ಕರ್ನಾಟಕ ಅರಣ್ಯ ಮ್ಯಾನ್ಯುಯಲ್ ಹಾಗೂ ಸರ್ಕಾರಿ ಅಧಿಸೂಚನೆ: ಆದೇಶಗಳು ಮತ್ತು ಕಾಲಕಾಲಕ್ಕೆ ಇಲಾಖೆಯಿಂದ ನೀಡಿದ ಸುತ್ತೋಲೆ ಮೇಲೆ ನಿರ್ದೇಶನ ಪ್ರಕಾರ ಅರಣ್ಯ ಗುತ್ತಿಗೆದಾರರು ಹಾಗೂ ಒಟ್ಟಾಗಿ ಕಾಮಗಾರಿಗಳನ್ನು ನಿರ್ವಹಿಸುವುದು.

ಪಿ.ಆರ್.512 ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

**ಲೋಕೋಪಯೋಗಿ ಇಲಾಖೆ**

**ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ**

**ಟೆಂಡರು ಪ್ರಕಟಣೆ**

**ನಂ: ಇಎನ್‌ಹೆಚ್:ಚಿ:ಸ.ಇ-2:ಟೆಂಪ್ರ:ಸಿಆರ್‌ಎಫ್:04-05/2579 ದಿನಾಂಕ: 29ನೇ ಅಕ್ಟೋಬರ್ 2004**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೋಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಮೊಹರಾದ ಲಕೋಟೆಯನ್ನು, ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಚೇರಿಯಲ್ಲಿ ದಿನಾಂಕ: 13.12.2004 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66 ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ಟೆಂಡರನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮರುದಿನವನ್ನು ಕೆಲಸದ ದಿನವೆಂದು ಪರಿಗಣಿಸಲಾಗುವುದು.

ಟೆಂಡರು ಕರೆ ಸಂಖ್ಯೆ ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿಪಡಿಸಿದ ಮೊತ್ತ (ರೂ.ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ + ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1 | ಕೇಂದ್ರ ರಸ್ತೆ ನಿಧಿಯಡಿಯಲ್ಲಿ ಚಿತ್ರದುರ್ಗ-ಭದ್ರಾವತಿ ರಸ್ತೆಯ ಕಿ.ಮೀ.0.00 ರಿಂದ 12.00 ರವರೆಗೆ ಆಯ್ದ ಭಾಗಗಳ ಅಭಿವೃದ್ಧಿ ಕಾಮಗಾರಿ | ರೂ. 40.00 ಲಕ್ಷಗಳು | ರೂ.40,000/- | 4,000+9% ಕೆಎಸ್‌ಟಿ + ಕೆಎಸ್‌ಟಿಯ ಮೇಲೆ 15% ಸರ್‌ಚಾರ್ಜ್ | ರಸ್ತೆ ಅಭಿವೃದ್ಧಿ ಕಾಮಗಾರಿ | 3 ತಿಂಗಳು (ಮಳೆಗಾಲ ಸಹಿತ) |

**ಷರತ್ತುಗಳು:**

1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಕಾರ್ಯನಿರ್ವಾಹಕ ಅಭಿಯಂತರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು, ಗುತ್ತಿಗೆದಾರರ ನೋಂದಾವಣಿ ಪತ್ರದ ಪ್ರತಿ ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿಪಡಿಸಿದ ಯಂತ್ರೋಪಕರಣಗಳ ಮಾಲೀಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.

| | | | |
|---|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿಸಲ್ಲಿಸುವ ಕೊನೆಯ ದಿನಾಂಕ: | :: | 18.11.2004 (ಕಛೇರಿ ವೇಳೆಯಲ್ಲಿ) |
| ಆ) | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: | :: | 01.12.2004 ರಿಂದ 02.12.2004 ರವರೆಗೆ (ಕಛೇರಿ ವೇಳೆಯಲ್ಲಿ) |
| ಇ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ | :: | 13.12.2004 ಮಧ್ಯಾಹ್ನ 4.00 ಗಂಟೆಯವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ) | ಟೆಂಡರ್‌ಗಳನ್ನು ತೆರೆಯುವ ದಿನಾಂಕ: | :: | 13.12.2004, ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |

**ಟೆಂಡರ್‌ಗಳಿಗೆ ಷರತ್ತುಗಳು:**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ:ಎಫ್ ಡಿಆರ್:ಪೇ ಆರ್ಡರ್ ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ಅನ್ನು ಟೆಂಡರ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ-66 ರಕ್ಕೆ ಅನುಗುಣವಾಗಿರತಕ್ಕದ್ದು.
2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು: ಸಂಸ್ಥೆಯವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ: ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ.: ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.
3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ಟೆಂಡರ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರಮ ಸಂಖ್ಯೆ | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 1) | 40/60 ಟಿ.ಪಿ.ಹೆಚ್ ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ. & ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | ಖರೀದಿಸಿದ ಇನ್‌ವಾಯ್ಸ್: ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 2) | ಪೇವರ್ ಫಿನೀಷರ್ ಸೆನ್ಸಾರ್‌ನೊಂದಿಗೆ | ಒಂದು (1) | -ಸದರಿ- |
| 3) | ವೈಬ್ರೇಟರಿ ರೋಲರ್ | ಒಂದು (1) | -ಸದರಿ- |
| 4) | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | -ಸದರಿ- |
| 5) | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | -ಸದರಿ- |
| 6) | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |
| 7) | ಎಕ್ಸ್‌ಕವೇಟರ್ | ಒಂದು (1) | ಮಾಲೀಕತ್ವದ ಪ್ರಮಾಣ ಪತ್ರ. |

4. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ.
5. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್ ಅನ್ನು" ಕಡ್ಡಾಯವಾಗಿ ಟೆಂಡರ್ ಜೊತೆಯಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್ ಅನ್ನು" ಸಲ್ಲಿಸದಿದ್ದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ.

6. ಟೆಂಡರ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ಟೆಂಡರ್‌ಗಳನ್ನು ಅನರ್ಹಗೊಳಿಸಲಾಗುವುದು.
7. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ಟೆಂಡರಿನ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು: ಏಜೆನ್ಸಿಗಳು: ಸಂಸ್ಥೆಯ ಪ್ರೊಫೈಲ್ ಅನ್ನು ಲಗತ್ತಿಸತಕ್ಕದ್ದು.
8. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
9. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
10. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
11. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಬಿ. ಪ್ರಭಾಕರ ಶೆಟ್ಟಿ**

ಪಿ.ಆರ್.509 ಕಾರ್ಯಪಾಲಕ ಅಭಿಯಂತರರು, ರಾ.ಹೆ. ವಿಭಾಗ, ಚಿತ್ರದುರ್ಗ.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ತೋಟಗಾರಿಕೆ ಮಾಹಿತಿ ಕೇಂದ್ರ, ಲಾಲ್‌ಬಾಗ್, ಬೆಂಗಳೂರು,**

**ಟೆಂಡರ್ ಪ್ರಕಟಣೆ**

**ಸಂ:ತೋಉನಿ:ತೋಮಾಕೆ:ವಿನಿ1:93:04-05 ದಿನಾಂಕ: 5ನೇ ನವೆಂಬರ್ 2004**

**ವಿಷಯ :** ಕಿರುಪುಸ್ತಕಗಳು, ಬ್ರೋಚರ್‌ಗಳು, ಹಸ್ತಪ್ರತಿಗಳು, ಡೆಸ್ಕ್‌ಟಾಪ್ ಕ್ಯಾಲೆಂಡರ್, ವರ್ಣ ಬ್ಲೋ-ಅಪ್‌ಗಳು ಇವುಗಳನ್ನು ಮುದ್ರಿಸಿ ಸರಬರಾಜು ಮಾಡಲು ಟೆಂಡರ್ ಆಹ್ವಾನಿಸುವ ಬಗ್ಗೆ.

2004-05ನೇ ಸಾಲಿಗೆ ಈ ಕೆಳಕಂಡಂತೆ ಐಟಂವಾರು ಪ್ರತ್ಯೇಕವಾಗಿ ಮುದ್ರಿಸಿ ಸರಬರಾಜು ಮಾಡಲು ಆಸಕ್ತ ಮುದ್ರಕರಿಂದ/ತಯಾರಕರಿಂದ ಮೊಹರು ಮಾಡಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್ ಫಾರಂ ಅನ್ನು ದಿನಾಂಕ: 16.11.04 ರಿಂದ 30.11.04 ರವರೆಗೆ ವಿತರಣೆ ಮಾಡಲಾಗುವುದು. ಹಾಗೂ ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು ದಿನಾಂಕ 6.12.04 ಮಧ್ಯಾಹ್ನ 3.00 ಗಂಟೆಯೊಳಗೆ ಈ ಕೆಳಸಹಿದಾರರ ಕಛೇರಿಗೆ ಸಲ್ಲಿಸಬೇಕು. ಅದೇ ದಿನ ಸಂಜೆ 5.00 ಗಂಟೆಗೆ ಹಾಜರಿದ್ದ ಟೆಂಡರ್‌ದಾರರ ಸಮ್ಮುಖದಲ್ಲಿ ಇಲ್ಲದಿದ್ದಲ್ಲಿ ಇಲಾಖೆಯ ಅಧಿಕಾರಿ/ ನೌಕರರ ಸಮ್ಮುಖದಲ್ಲಿ ತೆರೆಯಲಾಗುವುದು. ಪ್ರತಿಯೊಂದು ಐಟಂ ಮುದ್ರಣಕ್ಕೆ ಪ್ರತ್ಯೇಕ ಟೆಂಡರ್ ಸಲ್ಲಿಸತಕ್ಕದ್ದು.

**ಮುದ್ರಿಸಬೇಕಾದ ಐಟಂವಾರು ವಿವರ:**

**1. ಕಿರು ಪುಸ್ತಕಗಳು:**

1. ಕಿರುಪುಸ್ತಕಗಳು 1/8 ಅಳತೆಯುಳ್ಳದ್ದಾಗಿದ್ದು, 8 ರಿಂದ 20 ಪುಟಗಳನ್ನು ಹೊಂದಿರಬೇಕು.
2. ಮುದ್ರಣಕ್ಕೆ ಮಾಫ್‌ಲಿಥೋ ಕಾಗದವನ್ನು ಉಪಯೋಗಿಸುವುದು, ವಿಷಯವನ್ನು ಒಂದೇ ವರ್ಣದಲ್ಲಿ ಮುದ್ರಿಸುವುದು.
3. ರಕ್ಷಾಪುಟವನ್ನು ಬಹುವರ್ಣದಲ್ಲಿ 170 ಜಿ.ಎಸ್.ಎಂ. ಆರ್ಟ್ ಪೇಪರ್‌ನಲ್ಲಿ ಫೋಟೋ ಸಹಿತ ಮುದ್ರಿಸುವುದು ಹಾಗೂ ದರವನ್ನು ಪ್ರತ್ಯೇಕವಾಗಿ 1,000, 2,000, 3,000, 5,000, 8,000,10,000 ಪ್ರತಿಗಳಿಗೆ ನಮೂದಿಸುವುದು.
4. ದರವನ್ನು ಹೆಚ್ಚುವರಿ ಅಥವಾ ಕಡಿಮೆ 2 ಪುಟಕ್ಕೆ ಪ್ರತ್ಯೇಕವಾಗಿ ನಮೂದಿಸುವುದು.

**2. ಬ್ರೋಚರ್‌ಗಳು:**

1. 1/4 ಅಳತೆಯ ಬ್ರೋಚರ್‌ಗಳು 1 ಮಡಿಕೆ, 2 ಮಡಿಕೆ, 3 ಮಡಿಕೆ ಗಳಿಗೆ ಪ್ರತ್ಯೇಕವಾಗಿ ದರ ನಮೂದಿಸುವುದು.
2. ಮುದ್ರಣಕ್ಕೆ 170 ಜಿ.ಎಸ್.ಎಂ. ಆರ್ಟ್ ಪೇಪರ್ ಉಪಯೋಗಿಸಿ ಇಲಾಖೆಯು ನೀಡುವ ಫೋಟೋ ಸಹಿತ ಬಹುವರ್ಣದಲ್ಲಿ ಡಿಸೈನ್ ಮಾಡಿ ಮುದ್ರಿಸುವುದು ಹಾಗೂ ದರವನ್ನು ಪ್ರತ್ಯೇಕವಾಗಿ 1,000, 2,000, 3,000, 8,000, 10,000 ಪ್ರತಿಗಳಿಗೆ ನಮೂದಿಸುವುದು.
3. ಗ್ಲಾಸ್ ಫಿನಿಷಿಂಗ್ ಇರಬೇಕು.
4. ಲ್ಯಾಮಿನೇಷನ್ ಮಾಡಿದಲ್ಲಿ ದರವೆಷ್ಟಾಗುತ್ತದೆಂಬ ಬಗ್ಗೆ ದರ ಪ್ರತ್ಯೇಕವಾಗಿ ನಮೂದಿಸಬೇಕು.

**3. ಹಸ್ತಪ್ರತಿಗಳು:**

1. 24 ಸೆಂ. ಮೀ. ಉದ್ದ 12 ಸೇಂ. ಮೀ ಅಗಲ ಅಳತೆಯಲ್ಲಿ ಹಸ್ತಪ್ರತಿಗಳನ್ನು ಉತ್ತಮ ಮ್ಯಾಫ್‌ಲಿಥೋ ಕಾಗದದಲ್ಲಿ ಒಂದು ವರ್ಣದಲ್ಲಿ ಆಫ್‌ಸೆಟ್ ಮುದ್ರಣದಲ್ಲಿ ಒಂದು ಮಡಿಕೆ, 2 ಮಡಿಕೆ, 3 ಮಡಿಕೆಗಳಲ್ಲಿ ಮುದ್ರಿಸಬೇಕು.
2. ಹಸ್ತಪ್ರತಿಗಳು 70 ಜಿ.ಎಸ್.ಎಂ. ಇಂಡಿಯನ್ ಆರ್ಟ್ಸ್ ಪೇಪರ್‌ನಲ್ಲಿ 4 ವರ್ಣಗಳಲ್ಲಿ ಗ್ಲಾಸ್ ಫಿನಿಷಿಂಗ್‌ನಲ್ಲಿ ಮುದ್ರಿಸಲು ಸಹ ದರವನ್ನು ಪ್ರತ್ಯೇಕವಾಗಿ ನಮೂದಿಸಬೇಕು.
3. 1, 2, 3, ಮಡಿಕೆಗಳಲ್ಲಿ 1,000, 2,000, 3,000, 5,000, 8,000 ಮತ್ತು 10,000 ಸಂಖ್ಯೆವಾರು ಪ್ರತಿಗಳಿಗೆ ಪ್ರತ್ಯೇಕವಾಗಿ ದರ ನಮೂದಿಸಬೇಕು.
4. ಹಸ್ತಪತ್ರಿಗಳಲ್ಲಿ ಅಚ್ಚಾಗಬೇಕಾದ ವರ್ಣ ಫೋಟೋ ಅಥವಾ ಕಪ್ಪು ಬಿಳುಪು ಫೋಟೋಗಳಿಗೂ ದರ ಸೇರಿರಬೇಕು.
5. ದರವನ್ನು ಕಪ್ಪು ಬಿಳುಪು ಹಾಗೂ ಬಹುವರ್ಣ ಮುದ್ರಣಕ್ಕೆ ಪ್ರತ್ಯೇಕವಾಗಿ ಮಡಿಕೆವಾರು, ಸಂಖ್ಯೆವಾರು ನಮೂದಿಸುವುದು.

**4. ಡೆಸ್ಕ್‌ಟಾಪ್ ಕ್ಯಾಲೆಂಡರ್‌ಗಳು:**

1. 22 ಸಿಎಂ. X 14 ಸಿ.ಎಂ. ಅಳತೆಯುಳ್ಳ ಪ್ರತಿ ತಿಂಗಳಿಗೆ ಒಂದರಂತೆ 12 ಪುಟವಿರುವಂತೆ ಕ್ಯಾಲೆಂಡರ್ ಅನ್ನು ಮುದ್ರಿಸಿ ಇಲಾಖೆಯು ನೀಡುವ ವಿಷಯವನ್ನು ಮುದ್ರಿಸುವುದು.
2. ಮುದ್ರಣಕ್ಕೆ 170 ಜಿ.ಎಸ್.ಎಂ. ಆರ್ಟ್ ಪೇಪರ್ ಉಪಯೋಗಿಸಿ, ಈ ಕಛೇರಿಯಿಂದ ನೀಡುವ ಮಾಹಿತಿಯನ್ನು ಫೋಟೋ ಸಹಿತ ಬಹುವರ್ಣದಲ್ಲಿ ಡಿಸೈನ್ ಮಾಡಿ ಮುದ್ರಿಸುವುದು.

3. ಡೆಸ್ಕ್ ಟಾಪ್ ಕ್ಯಾಲೆಂಡರ್‌ಗಳು ಸ್ಪೈರಲ್ ಬೈಡಿಂಗ್ ಹೊಂದಿದ್ದು ಅದನ್ನು ಇಡಲು ಲಕೋಟೆಯನ್ನು, ಲಕೋಟೆಗಳ ಮೇಲೆ ಇಲಾಖೆಯು ನೀಡುವ ಚಿಹ್ನೆಯನ್ನು ಮುದ್ರಿಸುವುದು.
4. ಬೇಕಿರುವ ಸಂಖ್ಯೆಗಳು ಅಂದಾಜು 10,000/- ದರವನ್ನು ಹೆಚ್ಚುವರಿ ಅಥವಾ ಕಡಿಮೆ 500 ಪ್ರತಿಗಳಿಗೆ ಪ್ರತ್ಯೇಕವಾಗಿ ನಮೂದಿಸುವುದು.
5. ಮುದ್ರಿಸಬೇಕಾದ ಕ್ಯಾಲೆಂಡರ್‌ಗಳಲ್ಲಿ 1000 ಪ್ರತಿಗಳನ್ನು ಆಂಗ್ಲ ಭಾಷೆಯಲ್ಲೂ ಉಳಿದವನ್ನು ಕನ್ನಡ ಭಾಷೆಯಲ್ಲೂ ಮುದ್ರಿಸಬೇಕು. ಭಾಷಾಂತರ ವೆಚ್ಚವನ್ನು ಒಳಗೊಂಡಿರಬೇಕು.

**5. ಬ್ಲೋ-ಅಪ್‌ಗಳು:**

1. ವಿವಿಧ ಅಳತೆಯ ವರ್ಣದ ಛಾಯಾ ಚಿತ್ರಗಳ ಬ್ಲೋ-ಅಪ್ಸ್ ತಯಾರಿಸಿ ಲ್ಯಾಮಿನೇಷನ್ ಮಾಡುವುದು.
2. 16"x 20" ಬ್ಲೋ-ಅಪ್ಸ್ ಮಾಡಿ 4 ಎಂ.ಎಂ. ಸನ್‌ಬೋರ್ಡ್ ಲ್ಯಾಮಿನೇಷನ್.
3. 20"x 30" ಬ್ಲೋ-ಅಪ್ಸ್ ಮಾಡಿ 4 ಎಂ.ಎಂ. ಸನ್‌ಬೋರ್ಡ್ ಲ್ಯಾಮಿನೇಷನ್.
4. 30"x 40" ಬ್ಲೋ-ಅಪ್ಸ್ ಮಾಡಿ 4 ಎಂ.ಎಂ. ಸನ್‌ಬೋರ್ಡ್ ಲ್ಯಾಮಿನೇಷನ್.
5. ಪ್ರತಿ ಚದರ ಅಂಗುಲಕ್ಕೆ ದರವನ್ನು ಪ್ರತ್ಯೇಕವಾಗಿ ನಮೂದಿಸುವುದು.
6. ಬ್ಲೋ-ಅಪ್ಸ್ ಮಾಡಿಸಬೇಕಾದ ನೆಗೆಟಿವ್: ಪಾಸಿಟಿವ್‌ಗಳನ್ನು ಈ ಕಛೇರಿಯಿಂದ ನೀಡಲಾಗುವುದು.
7. ಬ್ಲೋ-ಅಪ್ಸ್‌ಗಳನ್ನು ಬೋರ್ಡ್‌ಗಳಿಗೆ ಅಂಟಿಸಲು ಅಥವಾ ತೂಗು ಹಾಕಲು ಸೂಕ್ತ ವ್ಯವಸ್ಥೆಯನ್ನು ಮಾಡಿರಬೇಕು.

**ನಿಯಮ ಹಾಗೂ ಷರತ್ತುಗಳು:**

1. ದರವನ್ನು ಈ ಕಛೇರಿಯಿಂದ ಪಡೆದ ಟೆಂಡರ್ ಫಾರಂಗಳಲ್ಲಿ ಮಾತ್ರ ನಮೂದಿಸಬೇಕು. ಕೆಲಸದ ಆದೇಶ ನೀಡಿದ 8 ದಿನಗಳೊಳಗೆ ಕರಡು ಪ್ರತಿಯನ್ನು ನೀಡಿ ಕೆಳಸಹಿದಾರರು ಅಂತಿಮ ಕರಡು ಪರಿಶೀಲನೆ ನಡೆಸಿ ಅನುಮೋದಿಸಿದ ನಂತರ 15 ದಿನಗಳೊಳಗೆ ತಯಾರಿಸಿ ಸರಬರಾಜು ಮಾಡಬೇಕು.
2. ಪ್ರತಿ ಐಟಂಗೂ ಪ್ರತ್ಯೇಕ ಟೆಂಡರ್ ಫಾರಂ ಅನ್ನು ಉಪಯೋಗಿಸತಕ್ಕದ್ದು.
3. ಪ್ರತಿಯೊಂದು ಟೆಂಡರ್ ಫಾರಂ ಜೊತೆ ರೂ. 2,000=00 ಗಳ ಮೌಲ್ಯದ ಡಿ.ಡಿ.ಯನ್ನು ತೋಟಗಾರಿಕೆ ಉಪ ನಿರ್ದೇಶಕರು, ತೋಟಗಾರಿಕೆ ಮಾಹಿತಿ ಕೇಂದ್ರ, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಇ.ಎಂ.ಡಿ. ಆಗಿ ಲಗತ್ತಿಸಬೇಕು.
4. ಮುದ್ರಣಕ್ಕೆ ತಗಲುವ ಒಟ್ಟು ವೆಚ್ಚದ ಮೇಲೆ ಹಾಲಿ ಜಾರಿಯಲ್ಲಿರುವ ದರಗಳಲ್ಲಿ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆಯನ್ನು ಮೂಲದಲ್ಲಿಯೇ ಕಟಾಯಿಸಲಾಗುವುದು.
5. ಯಾವುದೇ ಕಾರಣಕ್ಕೂ ಮುಂಗಡ ನೀಡಲಾಗುವುದಿಲ್ಲ.
6. ಸಂಪೂರ್ಣ ಕೆಲಸವು ಕೆಳಸಹಿದಾರರು ಒಪ್ಪುವಂತಿರಬೇಕು.
7. ಯಾವುದೇ ಕಾರಣ ನೀಡದೆ ಟೆಂಡರ್ ಅನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಕೆಳಸಹಿದಾರರಿಗಿರುತ್ತದೆ.
8. ಟೆಂಡರ್ ಅನ್ನು ಇರಿಸಿದ ಲಕೋಟೆ ಮೇಲೆ "........................................ ಗಾಗಿ ಟೆಂಡರ್" ಎಂದು ನಮೂದಿಸಬೇಕು. ಹಾಗೂ ಟೆಂಡರ್‌ದಾರರ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಬೇಕು.
9. ಟೆಂಡರ್‌ನಲ್ಲಿ ನಮೂದಿಸಿದ ದರವು ದಿನಾಂಕ: 31.3.04 ರವರೆಗೆ ಅನ್ವಯಿಸುವಂತಿರಬೇಕು.

ಪಿ.ಆರ್.510 ತೋಟಗಾರಿಕೆ ಉಪ ನಿರ್ದೇಶಕರು, ತೋಟಗಾರಿಕೆ ಮಾಹಿತಿ ಕೇಂದ್ರ, ಲಾಲ್‌ಬಾಗ್, ಬೆಂಗಳೂರು.

**ಕರ್ನಾಟಕ ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿರವರ ಕಛೇರಿ, ಹಳಿಯಾಳ ವಿಭಾಗ, ಹಳಿಯಾಳ**

**ಸಂ: ಸಿ2:ಎಡಿಎಂ:ವಾಹನ:ವಿಲೇವಾರಿ:ಸಿಆರ್-21/2003-04 ದಿನಾಂಕ: 5ನೇ ನವೆಂಬರ್ 2004**

**ಅರಣ್ಯ ಅಪರಾಧಗಳಲ್ಲಿ ಒಳಗೊಂಡ ಹಾಗೂ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನಗಳ ಟೆಂಡರ್ ಕಮ್ ಹರಾಜಿನ ಕುರಿತಾದ ಅಧಿಸೂಚನೆ**

ಈ ಮೂಲಕ ಯಾವತ್ತೂ ಸಾರ್ವಜನಿಕರಿಗೆ ತಿಳಿಯ ಬಯಸುವುದೇನೆಂದರೆ, ಹಳಿಯಾಳ ಅರಣ್ಯ ವಿಭಾಗದಲ್ಲಿ ಅರಣ್ಯ ಅಪರಾಧಗಳಲ್ಲಿ ಒಳಗೊಂಡ ಹಾಗೂ ಮುಟ್ಟುಗೋಲು ಹಾಕಿಕೊಳ್ಳಲಾದ ಈ ಕೆಳಗೆ ನಮೂದಿಸಿದಂತಹ ವಾಹನಗಳನ್ನು ಬಹಿರಂಗವಾಗಿ ಟೆಂಡರ್ ಕಮ್ ಹರಾಜಿನ ಮೂಲಕ ವಿಲೇವಾರಿ ಮಾಡಲಾಗುವುದು. ಸದರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನಗಳನ್ನು ಇದ್ದ ಸ್ಥಳದಲ್ಲಿಯೇ ಯಾವ ಸ್ಥಿತಿಯಲ್ಲಿ ಇವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು. ಕಾರಣ ಆಸಕ್ತಿವುಳ್ಳವರು ಸದರಿ ಟೆಂಡರ್ ಕಮ್ ಹರಾಜಿನಲ್ಲಿ ಭಾಗವಹಿಸಿ ವಾಹನಗಳನ್ನು ಪಡೆದುಕೊಳ್ಳಬಹುದಾಗಿದೆ. ಸದರ ಟೆಂಡರ್ ಕಮ್ ಹರಾಜನ್ನು ದಿನಾಂಕ: 7.12.2004 ರಂದು ಕರೆಯಲಾಗಿದ್ದು ಅದೇ ದಿನ ಮಧ್ಯಾಹ್ನ 3.00 ಘಂಟೆ ಸಮಯದ ನಂತರ ಮೊದಲು ಸವಾಲನ್ನು ಮಾಡಿ ನಂತರ ಟೆಂಡರ್‌ಗಳನ್ನು ತೆರೆಯಲಾಗುವುದು.

ಟೆಂಡರ್ ಕಮ್ ಸವಾಲನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ ರವರು ಸದರಿ ದಿನಾಂಕದಂದು ಖುದ್ದಾಗಿ ಅಥವಾ ಅವರಿಂದ ಅಧಿಕಾರವನ್ನು ಪಡೆದಂತಹ ಅಧಿಕಾರಿಗಳು ಹಳಿಯಾಳ ವಿಭಾಗೀಯ ಕಛೇರಿಯಲ್ಲಿ ನೇರವೇರಿಸುವರು.

ಖರೀದಿದಾರರು ಸವಾಲಿನಲ್ಲಿ ಭಾಗವಹಿಸಿ ತಮ್ಮ ಅತೀ ಹೆಚ್ಚಿನ ಬೇಡಿಕೆಯನ್ನು ನೀಡಬಹುದು. ಅಥವಾ ಟೆಂಡರ್‌ನಲ್ಲಿಯೂ ಸಹ ಭಾಗವಹಿಸಿ ತಮ್ಮ ಬೇಡಿಕೆ ನೀಡಬಹುದಾಗಿದೆ. ಹೀಗೆ ನೀಡಲಾದ ಬೇಡಿಕೆಗಳಲ್ಲಿ ಯಾವುದು ಹೆಚ್ಚು ಅದನ್ನು ಮಾತ್ರ ಪರಿಗಣಿಸಲಾಗುವುದು.

ಟೆಂಡರ ಕಮ್ ಹರಾಜಿನ ಶರತ್ತುಗಳ ಕುರಿತು ಹೊರಡಿಸಲಾಗುವ ವಿವರವಾದ ಅಧಿಸೂಚನೆಯನ್ನು ಈ ಕಛೇರಿಯಲ್ಲಿ ಸರಕಾರಿ ರಜಾ ದಿನಗಳನ್ನು ಹೊರತುಪಡಿಸಿ ಖುದ್ದಾಗಿ ಸಂಪರ್ಕಿಸಿ ಕಛೇರಿ ವೇಳೆಯಲ್ಲಿ ಪಡೆದುಕೊಳ್ಳಬಹುದು.

| ಅ. ನಂ. | ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನಗಳ ವಿವರ | ಟೆಂಡರ್ ಕಮ್ ಹರಾಜು ನಡೆಸುವ ಸ್ಥಳ | ಟೆಂಡರ್ ದಿನಾಂಕ | ಟೆಂಡರ್ ಕಮ್ ಹರಾಜಿನಲ್ಲಿ ಭಾಗವಹಿಸುವವರು ಇಡಬೇಕಾದ ಅಮಾನತ್ ಹಣ | ವಾಹನಗಳನ್ನು ವಿಲೇವಾರಿ ಮಾಡಲು ಇಟ್ಟಂತಹ ಸ್ಥಳ |
|---|---|---|---|---|---|
| 1 | 2 | 3 | 4 | 5 | 6 |

